# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 585

ವಿಧಾನ ಪರಿಷತ್ತಿನ ಸದಸ್ಯರ ಹೆಸರು : ಶ್ರೀ ಎಸ್.ಎಲ್. ಭೋಜೇಗೌಡ (ಶಿಕ್ಷಕರ ಕ್ಷೇತ್ರ)

ಉತ್ತರಿಸಬೇಕಾದ ದಿನಾಂಕ : 10.03.2020

ಉತ್ತರಿಸುವ ಸಚಿವರು : ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಬಿ.ಪಿ.ಎಲ್ ಕಾರ್ಡ್ ಹೊಂದಿದವರಿಗೆ ತಿಂಗಳಿಗೆ ವಿತರಿಸುವ ಆಹಾರ ಧಾನ್ಯಗಳ ಪ್ರಮಾಣವೆಷ್ಟು; ಕಡಿಮೆ ಪ್ರಮಾಣದಲ್ಲಿ ವಿತರಣೆಯಾಗಿರುವ ಉದಾಹರಣೆ ಇದೆಯೇ; | ಅನ್ನಭಾಗ್ಯ ಯೋಜನೆಯಡಿ ಪ್ರತಿ ತಿಂಗಳು ಬಿ.ಪಿ.ಎಲ್ ಪಡಿತರ ಚೀಟಿ ಹೊಂದಿರುವ ಕುಟುಂಬದ ಪ್ರತಿ ಸದಸ್ಯರಿಗೆ ತಲಾ 7ಕೆ.ಜಿ ಅಕ್ಕಿಯನ್ನು ಉಚಿತವಾಗಿ ವಿತರಿಸಲಾಗುತ್ತಿದೆ.<br>ಕಡಿಮೆ ಪ್ರಮಾಣದಲ್ಲಿ ಅಕ್ಕಿ ವಿತರಣೆ ಮಾಡಿರುವ ಪ್ರಕರಣಗಳು ಗಮನಕ್ಕೆ ಬಂದಾಗ ಕ್ರಮ ವಹಿಸಲಾಗುತ್ತಿದೆ. |
| ಆ | ಹಾಗಿದ್ದಲ್ಲಿ, ಸರ್ಕಾರದಿಂದ ಆಹಾರ ಧಾನ್ಯಗಳ ವಿತರಣೆಗೆ ಒದಗಿಸುವ ಅನುದಾನವೆಷ್ಟು; ಅನುದಾನವು ಸೂಕ್ತ ರೀತಿಯಲ್ಲಿ ಬಳಕೆಯಾಗುತ್ತಿದೆಯೇ; ಮತ್ತು ಅನುದಾನಕ್ಕೆ ತಕ್ಕಂತೆ ಆಹಾರ ವಿತರಣೆಯಾಗುತ್ತಿದೆಯೇ; | 2019-20ನೇ ಸಾಲಿನಲ್ಲಿ ಆಹಾರಧಾನ್ಯ ವಿತರಣೆಗಾಗಿ ಸರ್ಕಾರದಿಂದ ಒಟ್ಟು 3,85,467.01ಲಕ್ಷಗಳ ಅನುದಾನ ಒದಗಿಸಲಾಗಿದ್ದು, ಸದರಿ ಅನುದಾನವನ್ನು ಪ್ರತಿ ಮಾಹೆಯ ಹಂಚಿಕೆ ಪ್ರಮಾಣಕ್ಕನುಗುಣವಾಗಿ ಬಳಕೆ ಮಾಡಲಾಗುತ್ತಿದೆ. |
| ಇ | ಅಂಗನವಾಡಿ ಮತ್ತು ಶಾಲಾ ಮಕ್ಕಳಿಗೆ ಒದಗಿಸಲಾಗುವ ಆಹಾರ ವಿತರಣೆಯು ಗುಣಮಟ್ಟದಿಂದ ಕೂಡಿದೆಯೇ; | ಮಧ್ಯಾಹ್ನ ಉಪಹಾರ ಯೋಜನೆಗೆ ಒಳಪಡುವ ಎಲ್ಲಾ ಶಾಲೆಗಳಲ್ಲಿ ಒದಗಿಸಲಾಗುವ ಆಹಾರವು ಗುಣಮಟ್ಟದಿಂದ ಕೂಡಿದೆ. |
| ಈ | ಬಿ.ಪಿ.ಎಲ್ ಕಾರ್ಡ್ ವಿತರಣೆಯು ಕ್ರಮವಾಗಿ ಸರಿಯಾದ ಫಲಾನುಭವಿಗಳಿಗೆ ತಲುಪುತ್ತಿದೆಯೇ; ಹಾಗಿದ್ದಲ್ಲಿ, ಇದರಲ್ಲಿ ಅಕ್ರಮ ಎಸಗುತ್ತಿರುವವರ ವಿರುದ್ಧ ಸರ್ಕಾರ ಕೈಗೊಂಡ ಕ್ರಮಗಳೇನು? | ರಾಜ್ಯದಲ್ಲಿ ಬಿ.ಪಿ.ಎಲ್ ಕಾರ್ಡ್ ಪಡೆಯಲು ಆಧಾರ್, ಇ-ಕೆ.ವೈ.ಸಿ ಮತ್ತು ಕುಟುಂಬದ ವಾರ್ಷಿಕ ವರಮಾನ ವಿವರಗಳನ್ನು ಆನ್ ಲೈನ್ ಮೂಲಕವೇ ಸಂಗ್ರಹಿಸಿ, ಬಿ.ಪಿ.ಎಲ್ ಅರ್ಹತೆಯ ಮಾನದಂಡಗಳನ್ವಯ ಪಡಿತರ ಚೀಟಿಯನ್ನು ಆನ್ ಲೈನ್ ಮೂಲಕವೇ ಅನುಮೋದಿಸಲಾಗುತ್ತದೆ ಹಾಗೂ ಫಲಾನುಭವಿಗಳಿಗೆ ನೇರವಾಗಿ ಅಂಚೆ ಮೂಲಕವೇ ತಲುಪಿಸಲಾಗುತ್ತಿದೆ.<br>ತಪ್ಪು ಮಾಹಿತಿಯನ್ನು ನೀಡಿ ಅಕ್ರಮವಾಗಿ ಪಡೆದಿದ್ದ ಒಟ್ಟು 63,922 ಪಡಿತರ ಚೀಟಿಗಳನ್ನು ಕಳೆದ ಎಂಟು ತಿಂಗಳಿನಿಂದ ಗುರುತಿಸಿ ಅವರಿಂದ ರೂ.96,27,960/- ದಂಡವನ್ನು ಸಂಗ್ರಹಿಸಿ ಪಡಿತರ ಚೀಟಿಗಳನ್ನು ರದ್ದುಪಡಿಸಲಾಗಿದೆ. |

ಆನಾಸ 73 ಡಿಆರ್ ಎ 2020 (ಇ-ಆಫೀಸ್)

(ಕೆ.ಗೋಪಾಲಯ್ಯ)
ಆಹಾರ, ನಾಗರಿಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಹಾಗೂ
ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.